ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಜೂನ್ ೧೧, ೨೦೧೫ (ಜ್ಯೇಷ್ಠ ೨೧, ಶಕ ವರ್ಷ ೧೯೩೭)<br>Bangalore, Thursday, June 11, 2015 (Jyeishta 21, Shaka Varsha 1937) | ಸಂಚಿಕೆ ೨೪<br>Issue 24 |
|---|---|---|

# ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಮೆ. ಹನೀವೆಲ್ ಟೆಕ್ನಾಲಜಿ ಲ್ಯಾಬ್ ಸೊಲ್ಯೂಷನ್ಸ್ ಪ್ರೈ.ಲಿ. ರವರಿಗೆ ತಂತ್ರಾಂಶ ಅಭಿವೃದ್ಧಿ/ಐಟಿ ಸೇವೆಗಳನ್ನು ಭೋಗನ ಹಳ್ಳಿ ದೊಡ್ಡಕಾನಹಳ್ಳಿ, ವರ್ತೂರು ಹೋಬಳಿ, ಬೆಂಗಳೂರಿನಲ್ಲಿ ಸ್ಥಾಪಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಐಟಿಡಿ 03 ಪಿಆರ್‌ಎಂ 2014, ದಿನಾಂಕ : 03–03–2014.
2. ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಇವರ ಪತ್ರ ಸಂಖ್ಯೆ : KBITS/266/EOP/59/2014-15, ದಿನಾಂಕ : 27–01–2015.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿಯನ್ನು ರಚಿಸಲು ಹಾಗೂ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಸಂಸ್ಥೆಯನ್ನು ನೋಡೆಲ್ ಏಜೆನ್ಸಿಯಾಗಿ ನೇಮಿಸಿ ಬಂಡವಾಳ ಹೂಡಿಕೆದಾರರಿಗೆ/ಉದ್ದಿಮೆದಾರರಿಗೆ ಯೋಜನೆಗಳನ್ನು ತ್ವರಿತವಾಗಿ ಅನುಷ್ಠಾನಗೊಳಿಸಲು ಮಾರ್ಗದರ್ಶಿಯಾಗಿ ಸೇವೆಯನ್ನು ಒದಗಿಸಿ ಅನುಕೂಲ ಕಲ್ಪಿಸಿಕೊಡಲು ಆದೇಶವನ್ನು ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಇವರ ಪತ್ರದಲ್ಲಿ ದಿನಾಂಕ : 6–11–2014ರಂದು ನಡೆದ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ಸಮಿತಿಯ ಸಭೆಯಲ್ಲಿ ಮೆ. ಹನಿವೆಲ್ ಟೆಕ್ನಾಲಜೀಸ್ ಲ್ಯಾಬ್ ಸೊಲ್ಯೂಷನ್ಸ್ ಪ್ರೈ ಲಿಮಿಟೆಡ್‌ನವರು ಬೆಂಗಳೂರಿನ ವರ್ತೂರು ಹೋಬಳಿ, ದೊಡ್ಡಕಾನಹಳ್ಳಿ, ಬೋಗನ ಹಳ್ಳಿ ಇಲ್ಲಿ ತಂತ್ರಾಂಶ ಅಭಿವೃದ್ಧಿ/ಐಟಿ ಸೇವೆಗಳನ್ನು ಆರ್.ಎಂ.ಝಡ್. ಇಕೋವರ್ಲ್ಡ್ ಇನ್ಫ್ರಾಸ್ಟ್ರಕ್ಚರ್ ಪ್ರೈವೇಟ್ ಲಿಮಿಟೆಡ್‌ನಲ್ಲಿ ಸ್ಥಾಪಿಸಲು ಉದ್ದೇಶಿಸಿದ್ದು ಸದರಿ ಸಂಸ್ಥೆಯವರು ಈ ಕೆಳಕಂಡ ಕೋರಿಕೆಯನ್ನು ಸಮಿತಿಯ ಮುಂದೆ ಸಲ್ಲಿಸಿರುತ್ತಾರೆ ಎಂದು ತಿಳಿಸುತ್ತಾ, ಮೆ. ಹನಿವೆಲ್ ಟೆಕ್ನಾಲಜೀಸ್ ಲ್ಯಾಬ್ ಸೊಲ್ಯೂಷನ್ಸ್ ಪ್ರೈ. ಲಿಮಿಟೆಡ್‌ನವರು ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಗೆ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ಸಮಿತಿ ಸಭೆಯ ತೀರ್ಮಾನದಂತೆ ಹಾಗೂ ಅನುಮೋದನೆಯಂತೆ ಸೂಕ್ತ ಸರ್ಕಾರಿ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ.

| ಹಿನ್ನೆಲೆ | ಪ್ರೈವೇಟ್ ಲಿಮಿಟೆಡ್ ಕಂಪನಿ |
|---|---|
| ಉತ್ಪನ್ನ/ ಚಟುವಟಿಕೆ | ಈ ಕೆಳಗಿನ ವಲಯಗಳಲ್ಲಿ/ಅಧೀನ ಸಂಸ್ಥೆಗಳಲ್ಲಿ ಐಟಿ ಸೇವೆಗಳು<br>1) ವೈಮಾನಿಕ ವಿಭಾಗ<br>2) ಯಾಂತ್ರಿಕ ಹಾಗೂ ನಿಯಂತ್ರಣ ಪರಿಹಾರಗಳು<br>3) ಮಾಹಿತಿ ತಂತ್ರಜ್ಞಾನ ಪರಿಹಾರಗಳು ಹಾಗೂ ಸೇವೆಗಳು, ಕಾರ್ಯಪ್ರವೃತ್ತಿ ವಸ್ತುಗಳು ಮತ್ತು ತಂತ್ರಜ್ಞಾನಗಳು |
| ಭೂಮಿಯ ಅಳತೆ | 5 ಎಕರೆ 16 ಗುಂಟೆಯಷ್ಟು ಭೂಮಿಯನ್ನು ಕಂಪನಿಯಿಂದಲೇ ಖರೀದಿಸಬೇಕಾಗುತ್ತದೆ. |
| ಸ್ಥಳ | ಆರ್.ಎಂ.ಝಡ್. ಇಕೋವರ್ಲ್ಡ್ ಇನ್ಫ್ರಾಸ್ಟ್ರಕ್ಚರ್ ಪ್ರೈವೇಟ್ ಲಿಮಿಟೆಡ್, ಭೋಗನ ಹಳ್ಳಿ, ದೊಡ್ಡಕಾನಹಳ್ಳಿ, ವರ್ತೂರು ಹೋಬಳಿ, ಬೆಂಗಳೂರು. |
| ಹಣ ಹೂಡಿಕೆ | ರೂ. 1373 ಕೋಟಿಗಳು (ಬೃಹತ್ ಯೋಜನೆ ಎಂದು ವರ್ಗೀಕರಿಸಲಾಗಿದೆ) |

| | |
|---|---|
| ಉದ್ಯೋಗ | 500 ಜನ |
| ಪ್ರವರ್ತಕರು | ಹನೀವೆಲ್ ಟೆಕ್ನಾಲಜಿ ಲ್ಯಾಬ್ ಸೊಲ್ಯೂಷನ್ಸ್ ಪ್ರೈ. ಲಿಮಿಟೆಡ್ |
| ಕಂಪನಿಯ ನಿವ್ವಳ ಮೌಲ್ಯ | ರೂ. 1370.31 ಕೋಟಿಗಳು, 31ನೇ ಮಾರ್ಚ್ 2013 ರಂತೆ |

ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ, ಷರತ್ತುಗಳೊಂದಿಗೆ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಐಟಿಡಿ 01 ಎಂಡಿಎ 2015, ಬೆಂಗಳೂರು, ದಿನಾಂಕ : 06-02-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆ. ಹನೀವೆಲ್ ಟೆಕ್ನಾಲಜೀಸ್ ಲ್ಯಾಬ್ ಸೊಲ್ಯೂಷನ್ಸ್ ಪ್ರೈ. ಲಿಮಿಟೆಡ್‌ನವರು ಬೆಂಗಳೂರಿನ ವರ್ತೂರು ಹೋಬಳಿ, ದೊಡ್ಡಕಾನಹಳ್ಳಿ, ಬೋಗನ ಹಳ್ಳಿ ಇಲ್ಲಿ ತಂತ್ರಾಂಶ ಅಭಿವೃದ್ಧಿ/ಐಟಿ ಸೇವೆಗಳನ್ನು ಆರ್.ಎಂ.ಝಡ್. ಇಕೋವರ್ಲ್ಡ್ ಇನ್ಫ್ರಾಸ್ಟ್ರಕ್ಚರ್ ಪ್ರೈವೇಟ್ ಲಿಮಿಟೆಡ್‌ನಲ್ಲಿ ಸ್ಥಾಪಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

| ವಿಷಯಗಳು | ರಾ.ಉ.ಮ.ಒ.ಸಮಿತಿಯ ನಿರ್ಧಾರ |
|---|---|
| ಭೂ ಅವಶ್ಯಕತೆ | ಕಟ್ಟಡ ಜಾಗವಾಗಿ 7,80,000 ಚ.ಅಡಿಗಳನ್ನು ಆರ್.ಎಂ.ಝಡ್. ಇಕೋವರ್ಲ್ಡ್ ಇನ್ಫ್ರಾಸ್ಟ್ರಕ್ಚರ್ ಪ್ರೈವೇಟ್ ಲಿಮಿಟೆಡ್ ಇವರಿಂದ ಪಡೆಯಲು ಪ್ರಸ್ತಾವವಿರುವ 5.40 ಎಕರೆ ಅಳತೆಯ ಜಮೀನಿನಲ್ಲಿ ನಿರ್ಮಿಸುವುದು. |
| ನೀರು | ಕೆಐಎಡಿಬಿ/ಬಿಡಬ್ಲ್ಯೂಎಸ್‌ಎಸ್‌ಬಿ ಮೂಲಕ 6.50 ಲಕ್ಷ ಎಲ್.ಪಿ.ಡಿ. |
| ವಿದ್ಯುಚ್ಛಕ್ತಿ | 6900 ಕೆವಿಎ ಅನ್ನು ಬೆಸ್ಕಾಂ ಮೂಲಕ ಪಡೆಯುವುದು |
| ಮಾಲಿನ್ಯ ನಿಯಂತ್ರಣ ಒಪ್ಪಿಗೆ | ಪ್ರವರ್ತಕರು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಪರವಾನಗಿಯನ್ನೂ ಅಂತೆಯೇ ಅವಶ್ಯಕವಾಗಿದ್ದಲ್ಲಿ ಅರಣ್ಯ ಹಾಗೂ ನಿಸರ್ಗ ಮಂತ್ರಾಲಯದಿಂದ ಅಥವಾ ಭಾರತ ಸರ್ಕಾರ ಅಥವಾ ಕರ್ನಾಟಕ ಸರ್ಕಾರದ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯಿಂದ ಪರಿಸರ ಒಪ್ಪಿಗೆ (ಇ.ಸಿ) ಪಡೆದುಕೊಳ್ಳಲು ಸೂಚಿಸಲಾಗಿದೆ. |
| ಪ್ರೋತ್ಸಾಹಕಗಳು ಹಾಗೂ ರಿಯಾಯಿತಿಗಳು | ರಾಜ್ಯದ ಐಟಿ (ಐ4) ನೀತಿಯಂತೆ, ಯೋಜನೆಯನ್ನು ಬೃಹತ್ ಯೋಜನೆ ಎಂದು ವರ್ಗೀಕರಿಸತಕ್ಕದ್ದು. |
| ಶಾಸನಬದ್ಧ ಪರವಾನಗಿಗಳು | ಪ್ರವರ್ತಕರುಗಳು ಅವಶ್ಯ ಶಾಸನಬದ್ಧ ಪರವಾನಗಿಗಳನ್ನು ಸಂಬಂಧಿಸಿದ ಇಲಾಖೆಗಳು/ಪ್ರಾಧಿಕಾರಗಳಿಂದ ಪಡೆಯುವುದು. |
| ಸ್ಥಳೀಯ ಜನತೆಗೆ ಉದ್ಯೋಗ | ಡಾ|| ಸರೋಜಿನಿ ಮಹಿಷಿ ವರದಿ ಹಾಗೂ ರಾಜ್ಯದ ಹೊಸ ಕೈಗಾರಿಕಾ ನೀತಿಯಂತೆ ಪ್ರವರ್ತಕರುಗಳು ಸ್ಥಳೀಯರಿಗೆ ಯೋಜನೆಗಳಲ್ಲಿ ಉದ್ಯೋಗ ಕಲ್ಪಿಸಿಕೊಡುವುದು. |

ಈ ಅನುಮೋದನೆಯು ಆದೇಶ ಹೊರಡಿಸಿದ ದಿನಾಂಕದಿಂದ 2 ವರ್ಷಗಳವರೆಗೆ ಮಾತ್ರ ಅನ್ವಯವಾಗುತ್ತದೆ. ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ : ಆಇ 03 ಟಿಎಫ್‌ಪಿ 2014, ದಿನಾಂಕ : 04-04-2014ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ರಾಮಪ್ಪ ಹ. ತಳವಾರ**

ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**P.R. 150**

**SC-200**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಸರ್ಕಾರದ ನಿವೃತ್ತ ಮುಖ್ಯ ಕಾರ್ಯದರ್ಶಿಗಳು/ಅಪರ ಮುಖ್ಯ ಕಾರ್ಯದರ್ಶಿಗಳಿಗೆ ಸೌಲಭ್ಯಗಳನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**

1. ಅನಧಿಕೃತ ಟಿಪ್ಪಣಿ ಸಂಖ್ಯೆ : ಡಿಪಿಎಆರ್ 35 ಪಿಆರ್‌ಎಸ್ 2013, ದಿನಾಂಕ : 18-03-2013.
2. ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಎಫ್‌ಡಿ 348 ಎಸ್‌ಇಆರ್-1/13, ದಿನಾಂಕ : 21-02-2015.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ : 18-03-2013ರ ಅನಧಿಕೃತ ಟಿಪ್ಪಣಿಯಲ್ಲಿ ನಿವೃತ್ತ ಮುಖ್ಯ ಕಾರ್ಯದರ್ಶಿಗಳು ಮತ್ತು ಅಪರ ಮುಖ್ಯ ಕಾರ್ಯದರ್ಶಿಗಳಿಗೆ ನಿವೃತ್ತ ಉಚ್ಛನ್ಯಾಯಾಲಯದ ನ್ಯಾಯಾಧೀಶರುಗಳಿಗೆ ನೀಡಲಾಗಿರುವ ಸೌಲಭ್ಯಗಳನ್ನು ವಿಸ್ತರಿಸುವ ಬಗ್ಗೆ ಆರ್ಥಿಕ ಇಲಾಖೆಯ ಸಹಮತಿಯನ್ನು ಕೋರಲಾಗಿತ್ತು.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ : 21-02-2015ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಕರ್ನಾಟಕ ಸರ್ಕಾರದ ನಿವೃತ್ತ ಮುಖ್ಯ ಕಾರ್ಯದರ್ಶಿಗಳು ಮತ್ತು ಅಪರ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ವೃಂದದ ಕೇಂದ್ರ ಸರ್ಕಾರದ ಕ್ಯಾಬಿನೆಟ್ ಸೆಕ್ರೆಟರಿಗಳಿಗೆ ದಿನಾಂಕ : 1-4-2015 ರಿಂದ ಜಾರಿಗೆ ಬರುವಂತೆ ಕೆಲವು ಭತ್ಯೆಗಳನ್ನು ಮತ್ತು ಸೌಲಭ್ಯಗಳನ್ನು ವಿಸ್ತರಿಸಲು ಒಪ್ಪಿಗೆ ನೀಡಿದೆ.

ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 41 ಎಸ್‌ಎಂಇ 2015, ಬೆಂಗಳೂರು, ದಿನಾಂಕ : 4ನೇ ಮಾರ್ಚ್, 2015.**

ಕರ್ನಾಟಕ ಸರ್ಕಾರದ ನಿವೃತ್ತ ಮುಖ್ಯ ಕಾರ್ಯದರ್ಶಿಗಳು, ನಿವೃತ್ತ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಕರ್ನಾಟಕ ವೃಂದದ ಕೇಂದ್ರ ಸರ್ಕಾರದ ನಿವೃತ್ತ ಕ್ಯಾಬಿನೆಟ್ ಸೆಕ್ರೆಟರಿಗಳು ಮತ್ತು ನಿವೃತ್ತ ಕೇಂದ್ರ ಸರ್ಕಾರದ ಕಾರ್ಯದರ್ಶಿಗಳಿಗೆ ಈ ಕೆಳಕಂಡ ಭತ್ಯೆಗಳು ಮತ್ತು ಸೌಲಭ್ಯಗಳನ್ನು ದಿನಾಂಕ : 1-4-2015 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ರಾಜ್ಯ ಸರ್ಕಾರವು ಹರ್ಷಿಸುತ್ತದೆ :-

(i) ಪರಿಚಾರಕ ಭತ್ಯೆ (Servant Allowance) ರೂ. 6,000/- ಪ್ರತಿ ತಿಂಗಳು.

(ii) ದೂರವಾಣಿ ವೆಚ್ಚ ರೂ. 1,000/- ಪ್ರತಿ ತಿಂಗಳು.

(iii) ಅಖಿಲ ಭಾರತ ಸೇವೆ (ವೈದ್ಯಕೀಯ ಹಾಜರಾತಿ) ನಿಯಮಗಳು 1954ರ ಅನ್ವಯ ವೈದ್ಯಕೀಯ ವೆಚ್ಚ ಮರುಪಾವತಿ.

(1) ಈ ಸಂಬಂಧದಲ್ಲಿನ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2070-00-800-0-18 Allowance and Reimbursement of Medical Expenses of Retired Chief Secretaries and Additional Chief Secretaries of the Government-014 Other Allowances 021-Reimbursement of Medical Expenses" ರಿಂದ ಭರಿಸತಕ್ಕದ್ದು.

(2) ಈ ಲೆಕ್ಕ ಶೀರ್ಷಿಕೆಗೆ ನಿರ್ದೇಶಕರು ಸಣ್ಣ ಉಳಿತಾಯ ಮತ್ತು ಪಿಂಚಣಿ ಇವರು ನಿಯಂತ್ರಣಾಧಿಕಾರಿಯಾಗಿರುತ್ತಾರೆ.

(3) ಕ್ರಮ ಸಂಖ್ಯೆ (i) ಮತ್ತು (ii)ರಲ್ಲಿನ ಭತ್ಯೆಗಳನ್ನು ಜಿಲ್ಲಾ ಕೇಂದ್ರ ಸ್ಥಾನದಲ್ಲಿ/ಬೆಂಗಳೂರಿನಲ್ಲಿ ಡಿ.ಡಿ.ಓ. ಆಗಿರುವ ಸಹಾಯಕ ನಿರ್ದೇಶಕರು, ಸಣ್ಣ ಉಳಿತಾಯ ಮತ್ತು ಪಿಂಚಣಿ ಇವರು ಸೆಳೆಯಬಹುದಾಗಿರುತ್ತದೆ ಮತ್ತು ಈ ಸಂಬಂಧದಲ್ಲಿನ ಕ್ಲೇಮ್‌ಗಳು ನಿವೃತ್ತ ಅಧಿಕಾರಿಗಳು ಸಲ್ಲಿಸುವ ಕ್ಲೇಮ್ ನಮೂನೆಗಳನ್ನು ಆಧರಿಸಿರುತ್ತದೆ.

(4) ವೈದ್ಯಕೀಯ ವೆಚ್ಚದ ಮರು ಪಾವತಿಯು ಅಖಿಲ ಭಾರತ ಸೇವೆಗಳು (ವೈದ್ಯಕೀಯ ಹಾಜರಾತಿ) ನಿಯಮಗಳು 1954ರ ಅನ್ವಯ ಇರತಕ್ಕದ್ದು ಮತ್ತು ಮರುಪಾವತಿಯು ಸೇವಾ ನಿರತ ಮುಖ್ಯ ಕಾರ್ಯದರ್ಶಿಗಳು ಮತ್ತು ಅಪರ ಮುಖ್ಯ ಕಾರ್ಯದರ್ಶಿಗಳಿಗೆ ಅನ್ವಯವಾಗುವ ರೀತಿಯಲ್ಲಿರತಕ್ಕದ್ದು.

(5) ವೈದ್ಯಕೀಯ ವೆಚ್ಚ ಮರುಪಾವತಿಯ ಕ್ಲೇಮ್‌ಗಳನ್ನು ಬಿಲ್ಲುಗಳೊಂದಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರು ಸ್ವೀಕರಿಸತಕ್ಕದ್ದು ಮತ್ತು ಅವುಗಳ ಸೂಕ್ತ ಪರಿಶೀಲನೆಯ ನಂತರ ಅವುಗಳನ್ನು ನಿರ್ದೇಶಕರು ಸಣ್ಣ ಉಳಿತಾಯ ಮತ್ತು ಪಿಂಚಣಿ ಇವರಿಗೆ ಕಳುಹಿಸತಕ್ಕದ್ದು.

(6) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರಿಂದ ಸ್ವೀಕೃತವಾಗುವ ಮರುಪಾವತಿ ಕ್ಲೇಮ್‌ಗಳನ್ನು ನಿರ್ದೇಶಕರು, ಸಣ್ಣ ಉಳಿತಾಯ ಮತ್ತು ಪಿಂಚಣಿ ಇವರು ಸೆಳೆದು ವಿತರಿಸತಕ್ಕದ್ದು.

(7) ನಿವೃತ್ತ ಅಧಿಕಾರಿಗಳು ಯಾವುದೇ ಸರ್ಕಾರದ ನೇಮಕಾತಿಗಳು (Government Assignments) ಅಥವಾ ಕೆ.ಇ.ಆರ್.ಸಿ. ಮಾಹಿತಿ ಆಯೋಗ, ವೇತನ ಆಯೋಗ ಇತ್ಯಾದಿ ಆಯೋಗಗಳಲ್ಲಿ ಮರು ನೇಮಕಾತಿ ಹೊಂದಿರುವ ಪ್ರಕರಣಗಳಲ್ಲಿ ಪರಿಚಾರಕ ಭತ್ಯೆ, ದೂರವಾಣಿ ವೆಚ್ಚವನ್ನು ಈ ಆದೇಶದ ಅನ್ವಯ ಅಥವಾ ಮರುನೇಮಕಾತಿ ಹೊಂದಿರುವ ಹುದ್ದೆಗೆ ಅನ್ವಯವಾಗುವ ದರಗಳಲ್ಲಿ ಅಧಿಕಾರಿಯ ಇಚ್ಛೆಯನ್ವಯ ಮಿತಿಗೊಳಿಸಿ ಪಾವತಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 348 ಎಸ್‌ಇಆರ್-1/13, ದಿನಾಂಕ : 21-02-2015 ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಯು.ಹೆಚ್. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ (ಸೇವೆಗಳು-1).

## PERSONNEAL AND ADMINISTRATIVE REFORMS SECRETARIAT

**SUB :** Facilities to the retired Chief Secretaries/Additional Chief Secretaries of the Government-reg.

**READ :**
1. U.O. Note No. DPAR 35 PRS 2013, dated : 18-03-2013.
2. U.O. Note No. FD 348 SER-1/13, dated : 21-02-2015 of the Finance Department.

**Preamble :**

In U.O. Note Dated 18-03-2013 read at (1) above, the concurrence of Finance Department was sought for extending facilities provided to retired High Court Judges to the retired Chief Secretaries/Additional Chief Secretaries.

In U.O. Note dated : 21-02-2015 read at (2) above, the Finance Department has agreed to extend certain allownaces and the facilities to the retired Chief Secretaries and Additional Chief Secretaries of the Government of Karnataka, Cabinet Secretaries to the Government of India borne on the Karnataka cadre w.e.f. 1-4-2015.

Accordingly, the following orders are issued.

GOVERNMENT ORDER NO. DPAR 41 SME 2015, BENGALURU, DATED : 4$^{TH}$ MARCH, 2015.

State Government is pleased to sanction the following allowances and facilities to the retired Chief Secretaries/Additional Chief Secretaries of the Government of Karnataka and retired Cabinet Secretaries and retired Secretaries to the Government of India borne on the Karnataka Cadre with effect from 01-04-2015.

(i) Servant Allowance of Rs. 6,000/- per month

(ii) Telephone Charges of Rs. 1,000/- per month

(iii) Medical reimbursement as per All India Services (Medical attendance) Rules 1954.

(1) The expenditure of this account shall be borne from the Head of Account "2070-00-800-0-18 Allowance and Reimbursement of Medical Expenses of Retired Chief Secretaries and Additional Chief Secretaries of the Government-014 Other Allowances 021-Reimbursement of Medical Expenses"

(2) The Controlling Officer for the Head of Account will be the Director of Small Savings and Pensions.

(3) The Allowances at Sl. No. (i) and (ii) above are to be drawn by Assistant Director of Small savings and Pensions who will be the DDOs in District Head Quarters/Bengaluru and the claim will be based on the claim form provided by the retired officers.

(4) Reimbursement of Medical Expenses shall be conered by the AIS (Medical Attendance) Rules, 1954 and the reimbursement will be as applicable to the Chief Secretaries and Additional Chief Secretaries in service.

(5) The Principal secretary DPAR will receive the claim for reimbursement of Medical Expenses along with the bills and after due check forward the same to the Director of Small Savings and Pensions.

(6) The reimbursement claim received from the Principal Secretary DPAR will be drawn and disbursed by the Director of Small Savings and Pensions.

(7) In case these retired officers are engaged in re-employment in any Government assignment or Commissions like KERC, Information Commission, Pay Commission, etc. the drawl of Servant Allowance, Telephone Charges will be limited of either covered under these orders of at rates applicable in re-employed assignments at the option of retired officer.

This Order issues with the concurrence of Finance Department vide its Note No. FD 348 SER-1/13, dated : 21-02-2015.

**P.R. 213**

BY ORDER AND IN THE NAME OF THE GOVERNOR OF KARNATAKA

U.H. NARAYANASWAMY

Under Secretary to Government,

DP & AR (Services-1).

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಲೋಕೋಪಯೋಗಿ ಗುಣ ಭರವಸೆ ಉಪ ವಿಭಾಗ, ಯಾದಗಿರಿ ಕಛೇರಿಯೆಂದು ಮಾರ್ಪಡಿಸಿರುವುದನ್ನು ಹಿಂಪಡೆದು ಲೋಕೋಪಯೋಗಿ ವಿಶೇಷ ಉಪ ವಿಭಾಗ, ಯಾದಗಿರಿ ಕಛೇರಿಯಾಗಿಯೇ ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಲೋಇ 396 ಸೇಸಎ 2014, ದಿನಾಂಕ : 04–08–2014.
2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ರವರ ಪತ್ರ ಸಂಖ್ಯೆ : ಸಿಬಿಎನ್/ಸಿ–3/ಉವಿಮಂ/2014–15/07076, ದಿನಾಂಕ : 17–11–2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶ ಸಂಖ್ಯೆ : ಲೋಇ 396 ಸೇಸಎ 2014, ದಿನಾಂಕ :04–08–2014ರಲ್ಲಿ ಲೋಕೋಪಯೋಗಿ ಗುಣ ಭರವಸೆ ಉಪ ವಿಭಾಗ ಯಾದಗಿರಿ ಹಾಗೂ ಇತರೆ ಉಪ ವಿಭಾಗವನ್ನು ಹೊಸದಾಗಿ ಸೃಜಿಸಿ, ಲೋಕೋಪಯೋಗಿ ವಿಶೇಷ ಉಪ ವಿಭಾಗ, ಯಾದಗಿರಿ ಕಛೇರಿಯನ್ನು ಲೋಕೋಪಯೋಗಿ ಇಲಾಖೆ ಗುಣ ಭರವಸೆ ಉಪ ವಿಭಾಗ, ಯಾದಗಿರಿಗೆ ಹುದ್ದೆ ಸಮೇತ ಮರು ಹೊಂದಾಣಿಕೆಯೊಂದಿಗೆ ಸ್ಥಳಾಂತರಿಸಿ, ದಿನಾಂಕ : 01–09–2014 ರಿಂದ ಜಾರಿಗೆ ಬರುವಂತೆ ದೈನಂದಿನ ಕಛೇರಿ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಆದೇಶಿಸಲಾಗಿತ್ತು.

ಮೇಲೆ ಓದಲಾದ (2) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ರವರು ಪತ್ರದಲ್ಲಿ ಯಾದಗಿರಿ ಜಿಲ್ಲೆಯು ಜಿಲ್ಲಾ ಕೇಂದ್ರವಾಗಿದ್ದು, ಶಹಾಪೂರ, ಸುರುಪುರ ತಾಲ್ಲೂಕುಗಳ ಭೌಗೋಳಿಕ ವಿಸ್ತೀರ್ಣ ಹೆಚ್ಚಾಗಿದ್ದು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಗಳ ಅಭಿವೃದ್ಧಿಪಡಿಸುವ ಯೋಜನೆಗಳನ್ನು ಅನುಷ್ಠಾನಗೊಳಿಸಲು ಯಾದಗಿರಿ ವಿಶೇಷ ಉಪ ವಿಭಾಗಕ್ಕೆ ಹಾಲಿ ಇರುವ ಕಾರ್ಯಭಾರದೊಂದಿಗೆ ಸದರಿ ಯೋಜನೆಗಳ ಯಾದಗಿರಿ, ಸೇಡಂ ಹಾಗೂ ಕಲಬುರಗಿ ವಿಭಾಗ ವ್ಯಾಪ್ತಿಯ ಕಾಮಗಾರಿಗಳ ಕಾರ್ಯಭಾರವನ್ನು ಹೆಚ್ಚುವರಿಯಾಗಿ ನಿರ್ವಹಿಸಿಕೊಂಡು ಹೋಗಲು ಯಾದಗಿರಿ ವಿಶೇಷ ಉಪ ವಿಭಾಗ ಅವಶ್ಯಕತೆ ಇರುವುದಾಗಿ ಹಾಗೂ ಹೈದ್ರಾಬಾದ್–ಕರ್ನಾಟಕ ಪ್ರದೇಶದ ವ್ಯಾಪ್ತಿಯಲ್ಲಿ ಬರುತ್ತಿದ್ದು, 371(ಜೆ) ಅಡಿಯಲ್ಲಿ ಈ ಭಾಗಕ್ಕೆ ಹೆಚ್ಚಿನ ಅನುದಾನ ಹಾಗೂ ಕಾಮಗಾರಿಗಳು ಬರುವ ಸಂಭವ ಇರುವುದರಿಂದ ಲೋಕೋಪಯೋಗಿ ವಿಶೇಷ ಉಪ ವಿಭಾಗ, ಯಾದಗಿರಿ ಕಛೇರಿಯನ್ನು ಲೋಕೋಪಯೋಗಿ ಗುಣ ಭರವಸೆ ಉಪ ವಿಭಾಗ, ಯಾದಗಿರಿಯೆಂದು ಮಾರ್ಪಡಿಸಿರುವ ಆದೇಶವನ್ನು ರದ್ದುಪಡಿಸಿ ಲೋಕೋಪಯೋಗಿ ಇಲಾಖೆ ವಿಶೇಷ ಉಪ ವಿಭಾಗ, ಯಾದಗಿರಿ ಕಛೇರಿಯಾಗಿ ಮುಂದುವರೆಸಲು ಕೋರಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 733 ಸೇಸಎ 2014, ಬೆಂಗಳೂರು, ದಿನಾಂಕ : 23–12–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ : ಲೋಇ 396 ಸೇಸಎ 2014, ದಿನಾಂಕ : 04–08–2014ರಲ್ಲಿನ ಅನುಬಂಧದಲ್ಲಿ ಕ್ರ.ಸಂ. 14ರಲ್ಲಿ ಲೋಕೋಪಯೋಗಿ ವಿಶೇಷ ಉಪ ವಿಭಾಗ, ಯಾದಗಿರಿ ಕಛೇರಿಯನ್ನು ಲೋಕೋಪಯೋಗಿ ಗುಣ ಭರವಸೆ ಉಪ ವಿಭಾಗ, ಯಾದಗಿರಿ ಹುದ್ದೆ ಸಮೇತ ಮರು ಹೊಂದಾಣಿಕೆ ಮಾಡಿ ಸ್ಥಳಾಂತರಿಸಿರುವುದನ್ನು ತಕ್ಷಣದಿಂದ ಜಾರಿಗೆ ಬರುವಂತೆ ಆಡಳಿತಾತ್ಮಕ ಹಿತದೃಷ್ಠಿಯಿಂದ ರದ್ದುಪಡಿಸಿ, ಲೋಕೋಪಯೋಗಿ ಇಲಾಖೆ ವಿಶೇಷ ಉಪ ವಿಭಾಗ, ಯಾದಗಿರಿಯಲ್ಲಿ ಯತ್ತಾಸ್ಥಿತಿಯಲ್ಲಿಯೇ ದಿನಾಂಕ : 31–03–2015 ರವರೆಗೆ ಮುಂದುವರೆಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 96, ದಿನಾಂಕ : 10–07–1996ರನ್ವಯ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಹೆಚ್. ಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ, (ಸೇವೆಗಳು–ಎ).

P.R. 240
SC-10

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಲೋಕೋಪಯೋಗಿ ಇಲಾಖೆ ನಂ. 3 ಮತ್ತು ನಂ. 4 ವಿಶೇಷ ಉಪ ವಿಭಾಗ, ಹಾಸನ ಕಛೇರಿಯನ್ನು ಹಾಸನದಲ್ಲಿಯೇ ಮುಂದುವರೆಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ : ಲೋಇ 396 ಸೇಸಎ 2014, ದಿನಾಂಕ : 04–08–2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶ ಸಂಖ್ಯೆ : ಲೋಇ 396 ಸೇಸಎ 2014, ದಿನಾಂಕ :04–08–2014ರಲ್ಲಿ ಲೋಕೋಪಯೋಗಿ ಗುಣ ಭರವಸೆ ಉಪ ವಿಭಾಗ ಚಾಮರಾಜನಗರ ಹಾಗೂ ಕಾರಾವಾರ ಉಪ ವಿಭಾಗಗಳನ್ನು ಹೊಸದಾಗಿ ಸೃಜಿಸಿ, ಲೋಕೋಪಯೋಗಿ ಇಲಾಖೆ ನಂ. 3 ಮತ್ತು 4ರ ವಿಶೇಷ ಉಪ ವಿಭಾಗ, ಹಾಸನ ಕಛೇರಿಯನ್ನು ಲೋಕೋಪಯೋಗಿ ಇಲಾಖೆ ಗುಣ ಭರವಸೆ ಉಪ ವಿಭಾಗ, ಚಾಮರಾಜನಗರ ಮತ್ತು ಕಾರವಾರ ಉಪ ವಿಭಾಗಗಳಿಗೆ ಹುದ್ದೆ ಸಮೇತ ಮರು ಹೊಂದಾಣಿಕೆಯೊಂದಿಗೆ ಸ್ಥಳಾಂತರಿಸಿ, ದಿನಾಂಕ : 01–09–2014 ರಿಂದ ಜಾರಿಗೆ ಬರುವಂತೆ ದೈನಂದಿನ ಕಛೇರಿ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಆದೇಶಿಸಲಾಗಿತ್ತು.

ಮುಂದುವರೆದು, ಲೋಕೋಪಯೋಗಿ ಇಲಾಖೆ ನಂ. 3 ಮತ್ತು 4 ವಿಶೇಷ ಉಪ ವಿಭಾಗ, ಹಾಸನ ಕಛೇರಿಯ ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿರುವ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಕೃಷಿ ಕಾಲೇಜು ಮತ್ತು ಪಶು ವೈದ್ಯಕೀಯ ಕಾಲೇಜುಗಳ ವಿವಿಧ ಅಭಿವೃದ್ಧಿ ಕಾಮಗಾರಿಗಳು ಕುಂಠಿತಗೊಳ್ಳುವುದರಿಂದ ಹಾಗೂ ಈ ವಿಭಾಗದ ವ್ಯಾಪ್ತಿಯಲ್ಲಿ ನಡೆಯುತ್ತಿರುವ ಹಲವಾರು ಲೋಕೋಪಯೋಗಿ ಕಾಮಗಾರಿಗಳಿಗೆ ಅಡಚಣೆ ಉಂಟಾಗುವುದರಿಂದ ಆಡಳಿತಾತ್ಮಕ ಹಿತದೃಷ್ಠಿಯಿಂದ ಲೋಕೋಪಯೋಗಿ ಇಲಾಖೆ ನಂ. 3 ಮತ್ತು 4 ವಿಶೇಷ ಉಪ ವಿಭಾಗ, ಹಾಸನ ಕಛೇರಿಯನ್ನು ಹಾಸನದಲ್ಲಿಯೇ ದಿನಾಂಕ : 31–03–2015ರವರೆಗೆ ಮುಂದುವರೆಸುವುದು ಅವಶ್ಯಕವಾಗಿರುವುದರಿಂದ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 654 ಸೇಸಎ 2014, ಬೆಂಗಳೂರು, ದಿನಾಂಕ : 12–11–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ : ಲೋಇ 396 ಸೇಸಎ 2014, ದಿನಾಂಕ : 04–08–2014ರಲ್ಲಿನ ಅನುಬಂಧದಲ್ಲಿ ಕ್ರ.ಸಂ. 8 ಮತ್ತು 11 ರಲ್ಲಿ ಲೋಕೋಪಯೋಗಿ ಇಲಾಖೆ ನಂ. 3 ಮತ್ತು 4 ವಿಶೇಷ ಉಪ ವಿಭಾಗ, ಹಾಸನ ಕಛೇರಿಯನ್ನು ಲೋಕೋಪಯೋಗಿ ಗುಣ ಭರವಸೆ ಉಪ ವಿಭಾಗ, ಚಾಮರಾಜನಗರ ಹಾಗೂ ಕಾರವಾರಕ್ಕೆ ಹುದ್ದೆ ಸಮೇತ ಮರು ಹೊಂದಾಣಿಕೆ ಮಾಡಿ ಸ್ಥಳಾಂತರಿಸಿರುವುದನ್ನು ತಕ್ಷಣದಿಂದ ಜಾರಿಗೆ ಬರುವಂತೆ ಆಡಳಿತಾತ್ಮಕ ಹಿತದೃಷ್ಠಿಯಿಂದ ರದ್ದುಪಡಿಸಿ, ಲೋಕೋಪಯೋಗಿ ಇಲಾಖೆ ನಂ. 3 ಮತ್ತು 4 ವಿಶೇಷ ಉಪ ವಿಭಾಗ, ಹಾಸನದಲ್ಲಿ ಯತ್ತಾಸ್ಥಿತಿಯಲ್ಲಿಯೇ ದಿನಾಂಕ : 31–03–2015 ರವರೆಗೆ ಮುಂದುವರೆಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 96, ದಿನಾಂಕ : 10–07–1996ರನ್ವಯ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಹೆಚ್. ಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ, (ಸೇವೆಗಳು–ಎ).

P.R. 241
SC-10

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ಲೋಕೋಪಯೋಗಿ ಇಲಾಖೆಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಹುದ್ದೆಗೆ ನೇರ ನೇಮಕಾತಿಗೊಂಡ ಶ್ರೀ ಸಿ. ಪರಮೇಶ, ಇವರ ನೇಮಕಾತಿಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :**

1. ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ : ಇ(1)/6591/2011-12/ಪಿಎಸ್‌ಸಿ, ದಿನಾಂಕ: 03-01-2012.
2. ಸರ್ಕಾರದ ಪತ್ರ ಸಂಖ್ಯೆ : ಲೋಇ 54 ಸೇಸಎ 2012 (1), ದಿನಾಂಕ : 23-05-2014.
3. ಸರ್ಕಾರದ ಪತ್ರ ಸಂಖ್ಯೆ : ಲೋಇ 54 ಸೇಸಎ 2012, ದಿನಾಂಕ : 05-09-2014.
4. ಶ್ರೀ ಸಿ. ಪರಮೇಶ, ಮನೆ ನಂ. 166, ವಿವೇಕಾನಂದ ನಗರ, ರೆಡ್ಡಿ ಕಾಲೋನಿ, ಟಿ. ನರಸೀಪುರ ಅಂಚೆ, ಮೈಸೂರು ಜಿಲ್ಲೆ-571124 ಇವರ ಮನವಿ ದಿನಾಂಕ : 19-09-2014.

**ಪ್ರಸ್ತಾವನೆ :**

ಕರ್ನಾಟಕ ಲೋಕಸೇವಾ ಆಯೋಗದ ಉಲ್ಲೇಖಿತ (1)ರ ಅಧಿಸೂಚನೆಯಲ್ಲಿ ಶ್ರೀ ಸಿ. ಪರಮೇಶ, ಮನೆ ನಂ. 166, ವಿವೇಕಾನಂದ ನಗರ, ರೆಡ್ಡಿ ಕಾಲೋನಿ, ಟಿ. ನರಸೀಪುರ ಅಂಚೆ, ಮೈಸೂರು ಜಿಲ್ಲೆ-571124. ಇವರು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಹುದ್ದೆಗೆ ಪರಿಶಿಷ್ಟ ಜಾತಿ ಗ್ರಾಮೀಣ (SC-R) ಮೀಸಲಾತಿಯಡಿಯಲ್ಲಿ ಆಯ್ಕೆಗೊಂಡಿರುತ್ತಾರೆ. ಅದರಂತೆ, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಹಾಸನ, ಇವರು ಶ್ರೀ ಸಿ. ಪರಮೇಶ, ಇವರು ಗ್ರಾಮೀಣ ಅಭ್ಯರ್ಥಿ ಎಂದು ದೃಢೀಕರಿಸಿದ್ದರಿಂದ, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಹಾಗೂ ಸದಸ್ಯ ಕಾರ್ಯದರ್ಶಿ, ಜಿಲ್ಲಾ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗಗಳ ಜಾತಿ ಪರಿಶೀಲನಾ ಸಮಿತಿ, ಮೈಸೂರು ಜಿಲ್ಲೆ, ಮೈಸೂರು, ಇವರು ದಿನಾಂಕ : 10-09-2013ರ ಪತ್ರದೊಂದಿಗೆ ಒದಗಿಸಿದ ಸಿಂಧುತ್ವ ಪ್ರಮಾಣ ಪತ್ರದನ್ವಯ ಹಾಗೂ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಮೈಸೂರು, ಇವರು ದಿನಾಂಕ : 03-04-2014 ರಂದು ಶ್ರೀ ಸಿ. ಪರಮೇಶ, ಇವರ ವಿರುದ್ಧ ಯಾವುದೇ ಪ್ರತಿಕೂಲ ವರದಿಗಳು ಇರುವುದಿಲ್ಲವೆಂದು, ನೀಡಿದ ವರದಿಯನುಸಾರ ಉಲ್ಲೇಖಿತ (2)ರ ಅಧಿಸೂಚನೆಯಲ್ಲಿ ಶ್ರೀ ಸಿ. ಪರಮೇಶ, ಇವರನ್ನು ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ರೂ. 28100-700-28800-800-33600-900-39000-1050-45300-1200-50100ರ ವೇತನ ಶ್ರೇಣಿಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಹುದ್ದೆಯಲ್ಲಿ 2 ವರ್ಷಗಳ ಪರೀಕ್ಷಾರ್ಥ ಅವಧಿಯ ಮೇಲೆ ನೇಮಿಸಿ, ಸದರಿ ಅಧಿಸೂಚನೆಯಲ್ಲಿ ಅಭ್ಯರ್ಥಿಯು ನೇಮಕಾತಿ ಆದೇಶ ತಲುಪಿದ ದಿನಾಂಕದಿಂದ 15 ದಿವಸಗಳೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, 3ನೇ ಮಹಡಿ, ವಿಕಾಸಸೌಧ, ಬೆಂಗಳೂರು ಇವರಲ್ಲಿ ಕರ್ತವ್ಯಕ್ಕೆ ಹಾಜರಾಗಲು ಸೂಚಿಸಲಾಗಿರುತ್ತದೆ.

ಶ್ರೀ ಸಿ. ಪರಮೇಶ, ಇವರು ನಿಗಧಿತ ಅವಧಿಯಲ್ಲಿ ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಹುದ್ದೆಯ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಹಾಗೂ ಕರ್ತವ್ಯಕ್ಕೆ ಹಾಜರಾಗದೇ ಇರುವುದಕ್ಕೆ ಯಾವುದೇ ಕಾರಣಗಳನ್ನು ಸಹ ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲ. ಈ ಸಂಬಂಧ ಉಲ್ಲೇಖಿತ (3)ರ ಪತ್ರದಲ್ಲಿ ಶ್ರೀ ಸಿ. ಪರಮೇಶ, ಇವರಿಗೆ ಪತ್ರ ತಲುಪಿದ ಒಂದು ವಾರದೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, 3ನೇ ಮಹಡಿ, ವಿಕಾಸಸೌಧ, ಬೆಂಗಳೂರು ಇವರಲ್ಲಿ ಕರ್ತವ್ಯಕ್ಕೆ ಹಾಜರಾಗಲು. ಒಂದು ಪಕ್ಷ ಹಾಜರಾಗದೇ ಮತ್ತು ಈ ಕುರಿತು ಯಾವುದೇ ಸಮಜಾಯಿಷಿಯನ್ನು ಸರ್ಕಾರಕ್ಕೆ ನೀಡದೇ ಇದ್ದ ಪಕ್ಷದಲ್ಲಿ ನೀವು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹುದ್ದೆಗೆ ಕರ್ತವ್ಯಕ್ಕೆ ಹಾಜರಾಗಲು ಆಸಕ್ತಿ ಇಲ್ಲವೆಂದು ಭಾವಿಸಿ, ನಿಮ್ಮ ನೇಮಕಾತಿ ಆದೇಶವನ್ನು ರದ್ದುಪಡಿಸಲು ಕ್ರಮ ಕೈಗೊಳ್ಳಲಾಗುವುದೆಂದು ತಿಳಿಸಲಾಗಿರುತ್ತದೆ.

ಶ್ರೀ ಸಿ. ಪರಮೇಶ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಉಲ್ಲೇಖಿತ (4)ರ ಮನವಿಯನ್ನು ಅವರು ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಹುದ್ದೆಯ ಕರ್ತವ್ಯಕ್ಕೆ ಹಾಜರಾಗಲು ಆಸಕ್ತಿ ಇಲ್ಲವೆಂದು ತಿಳಿಸಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 54 ಸೇಸಎ 2012 (1), ಬೆಂಗಳೂರು, ದಿನಾಂಕ : 12ನೇ ನವೆಂಬರ್, 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ಲೋಕೋಪಯೋಗಿ ಇಲಾಖೆಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಹುದ್ದೆಗೆ ಪರಿಶಿಷ್ಟ ಜಾತಿ ಗ್ರಾಮೀಣ (SC_R) ಮೀಸಲಾತಿಯಡಿಯಲ್ಲಿ ಆಯ್ಕೆಗೊಂಡಿರುವ ಶ್ರೀ ಸಿ. ಪರಮೇಶ, ಮನೆ ನಂ. 166, ವಿವೇಕಾನಂದ ನಗರ, ರೆಡ್ಡಿ ಕಾಲೋನಿ, ಟಿ. ನರಸೀಪುರ ಅಂಚೆ, ಮೈಸೂರು ಜಿಲ್ಲೆ-571124 ಇವರ ನೇಮಕಾತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಹೆಚ್. ಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ, (ಸೇವೆಗಳು-ಎ).

**P.R. 259**
**SC-200**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಭವನ, ನವದೆಹಲಿ, ಇಲ್ಲಿನ ನಿವಾಸಿ ಆಯುಕ್ತರ ಕಛೇರಿಯ ಸಮನ್ವಯಾಧಿಕಾರಿ ಸಂಸದರ ಕೋಶ ಹುದ್ದೆಯನ್ನು ತಾತ್ಕಾಲಿಕವಾಗಿ ಉನ್ನತೀಕರಿಸಿ ಶ್ರೀಮತಿ ಮೋನಿಕಾ ಕಷ್ಠರಿ, ಜಂಟಿ ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನೆ, ನಗರ ಯೋಜನಾ ನಿರ್ದೇಶನಾಲಯ ಇವರನ್ನು ಸದರಿ ಉನ್ನತೀಕರಿಸಲಾದ ಹುದ್ದೆಯಲ್ಲಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ :** ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಆರ್.ಸಿ.ಕೆ./17/ ಎಸ್.ಇ.ಎಸ್./2007-08, ದಿನಾಂಕ : 24-07-2014.

**ಪ್ರಸ್ತಾವನೆ :**

ಮೇಲೆ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ, ಇವರು ತಮ್ಮ ಕಛೇರಿಯ ಸಮನ್ವಯಾಧಿಕಾರಿ ಸಂಸದರ ಕೋಶ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಮೋನಿಕಾ ಕಷ್ಕರಿ, ಉಪ ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನೆ, ನಗರ ಯೋಜನಾ ನಿರ್ದೇಶನಾಲಯ, ನಗರಾಭಿವೃದ್ಧಿ ಇಲಾಖೆ ಇವರಿಗೆ ನಗರಾಭಿವೃದ್ಧಿ ಇಲಾಖೆಯ ಅಧಿಸೂಚನೆ ಸಂಖ್ಯೆ : ನಅಇ 46 ನಯೋಸೇ 2014, ದಿನಾಂಕ : 02-07-2014 ಮತ್ತು ತಿದ್ದುಪಡಿ ಅಧಿಸೂಚನೆ ದಿನಾಂಕ : 11-07-2014 ಗಳಲ್ಲಿ ಜಂಟಿ ನಿರ್ದೇಶಕರ (ವೇತನ ಶ್ರೇಣಿ ರೂ. 40,050-56,500) ಹುದ್ದೆಗೆ ಸ್ಥಾನಪನ್ನಾ ಮುಂಬಡ್ತಿ ನೀಡಿ ನಗರ ಮತ್ತು ಗ್ರಾಮಾಂತರ ಯೋಜನೆ, ಜಂಟಿ ನಿರ್ದೇಶಕರ ವಿಭಾಗೀಯ ಕಛೇರಿ, ಗುಲ್ಬರ್ಗಾ ಇಲ್ಲಿ ಖಾಲಿ ಇರುವ ಹುದ್ದೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡ ನಂತರ ಸಮನ್ವಯಾಧಿಕಾರಿ, ಸಂಸದರ ಕೋಶ, ನಿವಾಸಿ ಆಯುಕ್ತರ ಕಛೇರಿ, ಕರ್ನಾಟಕ ಭವನ, ನವದೆಹಲಿ, ಹಾಲಿ ಕಾರ್ಯನಿರ್ವಹಿಸುತ್ತಿರುವ ಸ್ಥಳದಲ್ಲಿ ಮುಂದುವರಿಸಿ ಆದೇಶಿಸಲಾಗಿರುತ್ತದೆ. ಅದರಂತೆ, ಅಧಿಕಾರಿಯವರು ದಿನಾಂಕ : 23-07-2014ರ ಪೂರ್ವಾಹ್ನ ಸಮನ್ವಯಾಧಿಕಾರಿ, ಸಂಸದರ ಕೋಶದ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ ಎಂದು ತಿಳಿಸಿರುತ್ತಾರೆ.

ಮುಂದುವರೆದು, ಶ್ರೀಮತಿ ಮೋನಿಕಾ ಕಷ್ಕರಿ ಇವರು ನಿವಾಸಿ ಆಯುಕ್ತರು ಕಛೇರಿಯ ಸಂಸದರ ಕೋಶದಲ್ಲಿ ಸಮನ್ವಯಾಧಿಕಾರಿ ಹುದ್ದೆಯಲ್ಲಿ ದಿನಾಂಕ : 26-09-2013 ರಿಂದಲೂ ಸಮರ್ಪಕವಾಗಿ ಕರ್ತವ್ಯ ನಿರ್ವಹಿಸಿಕೊಂಡು ಬರುತ್ತಿದ್ದು, ಸದರಿಯವರ ಸೇವೆಯಾ ಈ ಕಛೇರಿಯಲ್ಲಿ ಅವಶ್ಯವಿರುವುದರಿಂದ ನಿವಾಸಿ ಆಯುಕ್ತರ ಕಛೇರಿಯಲ್ಲಿನ ಸಮನ್ವಯಾಧಿಕಾರಿ, ಸಂಸದರ ಕೋಶ ಹುದ್ದೆಯನ್ನು ದಿನಾಂಕ : 23-07-2014 ರಿಂದ ಅನ್ವಯವಾಗುವಂತೆ ತಾತ್ಕಾಲಿಕವಾಗಿ ರೂ. 40,050-56,550 ವೇತನ ಶ್ರೇಣಿಯಲ್ಲಿ ಉನ್ನತೀಕರಿಸಿ ಆದೇಶಿಸುವಂತೆ ಹಾಗೂ ಅಧಿಕಾರಿಯನ್ನು ಅದೇ ಹುದ್ದೆಯನ್ನು ಮುಂದುವರಿಸುವ ಸಂಬಂಧ ಆದೇಶ ಹೊರಡಿಸಲು ಕ್ರಮವಹಿಸುವಂತೆ ಕೋರಿರುತ್ತಾರೆ.

ನಿವಾಸಿ ಆಯುಕ್ತರು, ಕರ್ನಾಟಕ ಭವನ ಇವರು ನೀಡಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಮೋನಿಕಾ ಕಷ್ಕರಿ, ಇವರು ಸಮನ್ವಯಾಧಿಕಾರಿ, ಸಂಸದರ ಕೋಶ ನಿವಾಸಿ ಆಯುಕ್ತರ ಕಛೇರಿ, ಕರ್ನಾಟಕ ಭವನ, ನವದೆಹಲಿ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕ : 23-07-2014 ರಿಂದ ಅನ್ವಯವಾಗುವಂತೆ ಸಮನ್ವಯಾಧಿಕಾರಿ, ಸಂಸದರ ಕೋಶ ಹುದ್ದೆಯನ್ನು ತಾತ್ಕಾಲಿಕವಾಗಿ ರೂ. 40,050-56550 ರ ವೇತನ ಶ್ರೇಣಿಯ ಹುದ್ದೆಯನ್ನಾಗಿ ಉನ್ನತೀಕರಿಸಲು ಹಾಗೂ ಸದರಿ ಉನ್ನತೀಕರಿಸಲಾದ ಹುದ್ದೆಯಲ್ಲಿ ಶ್ರೀಮತಿ ಮೋನಿಕಾ ಕಷ್ಕರಿ, ಜಂಟಿ ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನೆ, ನಗರ ಯೋಜನಾ ನಿರ್ದೇಶನಾಲಯ ಇವರನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 281 ಸಉಸೇ 2014, ಬೆಂಗಳೂರು, ದಿನಾಂಕ : 10ನೇ ಮಾರ್ಚ್, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀಮತಿ ಮೋನಿಕಾ ಕಷ್ಕರಿ, ಜಂಟಿ ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನೆ, ನಗರ ಯೋಜನಾ ನಿರ್ದೇಶನಾಲಯ ಇವರು ಕರ್ನಾಟಕ ಭವನ, ನವದೆಹಲಿ, ಇಲ್ಲಿನ ನಿವಾಸಿ ಆಯುಕ್ತರ ಕಛೇರಿಯ ಸಮನ್ವಯಾಧಿಕಾರಿ, ಸಂಸದರ ಕೋಶ ಹುದ್ದೆಯಲ್ಲಿ ಮುಂಬಡ್ತಿ ಹೊಂದಿ ಕರ್ತವ್ಯಕ್ಕೆ ಹಾಜರಾದ ದಿನಾಂಕ : 23-07-2014ರಿಂದ ಅನ್ವಯವಾಗುವಂತೆ ಸಮನ್ವಯಾಧಿಕಾರಿ, ಸಂಸದರ ಕೋಶ ಹುದ್ದೆಯನ್ನು ತಾತ್ಕಾಲಿಕವಾಗಿ ರೂ. 40,050-56,550 ರ ವೇತನ ಶ್ರೇಣಿಯ ಹುದ್ದೆಯನ್ನಾಗಿ ಉನ್ನತೀಕರಿಸಿ ಸದರಿ ಉನ್ನತೀಕರಿಸಲಾದ ಹುದ್ದೆಯಲ್ಲಿ ಮುಂದುವರಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 139 ಸೇ-3/15, ದಿನಾಂಕ : 07-03-2015ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಾ॥ ಗೀತಾ ಎಲ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ (ಸೇವೆಗಳು-3).

**P.R. 260**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಭಾರತ ಸಂವಿಧಾನದ ಅನುಚ್ಛೇದ 16(4)ರನ್ವಯ ರಾಜ್ಯ ಸಿವಿಲ್ ಸೇವೆಗಳಿಗೆ ನೇರ ನೇಮಕಾತಿಯಲ್ಲಿ ಮೀಸಲಾತಿ ನೀಡುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 6 ಸೇಹಿಮ 2014, ಬೆಂಗಳೂರು, ದಿನಾಂಕ : 5-2-2015.**

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 8 ಸೆಹಿಮ 95, ದಿನಾಂಕ : 20-06-1995.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 20-06-1995ರ ಆದೇಶ ಸಂಖ್ಯೆ : ಸಿಆಸುಇ 8 ಸೆಹಿಮ 95ರಲ್ಲಿ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಮಾಡುವ ನೇರ ನೇಮಕಾತಿಯಲ್ಲಿ ಅನುಸರಿಸಬೇಕಾದ ನೇರ ಮೀಸಲಾತಿಯನ್ನು ನಿಗದಿಪಡಿಸಲಾಗಿದೆ. ಪ. ಜಾತಿ/ಪ.ಪಂ. ಮತ್ತು ಇತರೆ ಹಿಂದುಳಿದ ವರ್ಗಗಳ ಸಮೂಹದವರಿಗೆ ಮೀಸಲಿರಿಸಬೇಕಾದ ರಿಕ್ತ ಸ್ಥಾನಗಳ ಬಗ್ಗೆ 100 ಬಿಂದುಗಳ ರೋಸ್ಟರನ್ನು ಅಳವಡಿಸಲಾಗಿದೆ.

ಮೇಲ್ಕಂಡ ಆದೇಶದ ಕಂಡಿಕೆ 7,8 ಮತ್ತು 9ರಲ್ಲಿ ಪ್ರವರ್ಗ-1, ಪ್ರವರ್ಗ-2(ಎ), ಪ್ರವರ್ಗ-2(ಬಿ), ಪ್ರವರ್ಗ-3(ಎ), ಮತ್ತು ಪ್ರವರ್ಗ-3(ಬಿ) ಇವರುಗಳಿಗೆ ಗುರುತಿಸಲ್ಪಟ್ಟ ರಿಕ್ತ ಸ್ಥಾನಗಳಿಗೆ ಆಯಾ ವರ್ಗದ ಅರ್ಹ ಅಭ್ಯರ್ಥಿಗಳ ಲಭ್ಯತೆಯಲ್ಲಿನ ಕೊರತೆಯಿಂದಾಗಿ ಭರ್ತಿ ಮಾಡಲಾಗದ ರಿಕ್ತ ಸ್ಥಾನಗಳನ್ನು ಸಾಮಾನ್ಯ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡತಕ್ಕದ್ದೆಂದು ಮತ್ತು ಈ ರೀತಿ ನಷ್ಟಗೊಂಡ ರಿಕ್ತ ಸ್ಥಾನಗಳನ್ನು ಮುಂದಿನ ಮತ್ತು ತದನಂತರದ ನೇಮಕಾತಿಗಳಲ್ಲಿ ಮುಂದಕ್ಕೆ ಕೊಂಡೊಯ್ಯತಕ್ಕದ್ದೆಂದು ಆದೇಶಿಸಲಾಗಿರುತ್ತದೆ ಹಾಗೂ ಅಂತಹ ನಷ್ಟಗೊಂಡ ರಿಕ್ತ ಸ್ಥಾನಗಳನ್ನು ಭರ್ತಿ ಮಾಡಲು ಕೊಂಡೊಯ್ಯುವ ಪ್ರಕ್ರಿಯೆಯ ಬಗ್ಗೆ ವಿವರಿಸಲಾಗಿದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಮಾನ್ಯ ಮುಖ್ಯಮಂತ್ರಿಗಳು 2014–15ನೇ ಸಾಲಿನ ತಮ್ಮ ಆಯವ್ಯಯ ಭಾಷಣದಲ್ಲಿ ರಾಜ್ಯ ಸರ್ಕಾರಿ ಸೇವೆಗಳ ನೇಮಕಾತಿಯಲ್ಲಿ ಹಿಂದುಳಿದ ವರ್ಗಗಳ ಅಭ್ಯರ್ಥಿಗಳ ಕೊರತೆ ಉಂಟಾದಲ್ಲಿ ಈಗಿರುವ ನಿಯಮಗಳಂತೆ ಇಂತಹ ಕೊರತೆಯನ್ನು ಮೂರು ಕ್ಯಾಲೆಂಡರ್ ವರ್ಷಗಳವರೆಗೆ ಮಾತ್ರ ಮುಂದುವರೆಸಲು ಅವಕಾಶವಿದೆ. ಇದನ್ನು ಮೂರು ನೇಮಕಾತಿಯವರೆಗೆ ಅಥವಾ ಗರಿಷ್ಠ 5 ಕ್ಯಾಲೆಂಡರ್ ವರ್ಷಗಳವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗುವುದು ಎಂದು ಘೋಷಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಆದೇಶ ಸಂಖ್ಯೆ : ಸಿಆಸುಇ 8 ಸೆಹಿಮ 1995, ದಿನಾಂಕ : 20–06–1995ರ ಕಂಡಿಕೆ 8, 9 ಹಾಗೂ 11 ನ್ನು ಈ ಕೆಳಕಂಡಂತೆ ಮಾರ್ಪಡಿಸಿ ಆದೇಶಿಸಿದೆ.

ಅ. ಕಂಡಿಕೆ 8ರಲ್ಲಿನ "ಅದೇ ಕ್ಯಾಲೆಂಡರ್ ವರ್ಷದಲ್ಲಿ ಅಥವಾ ನಂತರದ ಎರಡು ಕ್ಯಾಲೆಂಡರ್ ವರ್ಷಗಳಲ್ಲಿ" ಎಂಬ ಪದಗಳಿಗೆ ಬದಲಾಗಿ "ಮೂರು ನೇಮಕಾತಿಯವರೆಗೆ ಅಥವಾ ಗರಿಗಷ್ಠ 5 ಕ್ಯಾಲೆಂಡರ್ ವರ್ಷಗಳವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ" ಎಂಬ ಪದಗಳನ್ನು ಪ್ರತಿಸ್ಥಾಪಿಸಲಾಗಿದೆ.

ಆ. ಕಂಡಿಕೆ 9ರ ಬದಲಾಗಿ ಈ ಕೆಳಕಂಡ ಕಂಡಿಕೆಯನ್ನು ಪ್ರತಿಸ್ಥಾಪಿಸಲಾಗಿದೆ.

"ಅಭ್ಯರ್ಥಿಗಳ ಕೊರತೆಯಿಂದಾಗಿ ಮೀಸಲಾತಿ ವರ್ಗಗಳ ರಿಕ್ತ ಸ್ಥಾನಗಳನ್ನು ಭರ್ತಿ ಮಾಡಲಾಗದೇ ಉಳಿದು ಹೋದ ಮತ್ತು ನಂತರದ ಆಯ್ಕೆಗಳಲ್ಲಿ ನಷ್ಟವನ್ನು ಭರ್ತಿ ಮಾಡಲು ಕೊಂಡೊಯ್ಯುವ ಪ್ರಕ್ರಿಯೆಯನ್ನು ಮುಂದಿನ 3 ನೇಮಕಾತಿಗಳು ಅಥವಾ ಗರಿಷ್ಠ 5 ಕ್ಯಾಲೆಂಡರ ವರ್ಷಗಳವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಮುಂದುವರೆಸತಕ್ಕದ್ದು. ಮೂರನೇ ನೇಮಕಾತಿಯಲ್ಲಿ ಅಥವಾ ಗರಿಷ್ಠ 5ನೇ ಕ್ಯಾಲೆಂಡರ್ ವರ್ಷದ ಅಂತ್ಯದಲ್ಲಿ ಯಾವುದೇ ಮೀಸಲಾತಿ ರಿಕ್ತ ಸ್ಥಾನವು ಹೊಂದಾಣಿಕೆಯಾಗದೇ ಉಳಿದುಕೊಂಡರೆ, ಅವು ವರ್ಗೀಕರಣವನ್ನು ಕಳೆದುಕೊಳ್ಳುತ್ತವೆ ಮತ್ತು ಮುಂದಿನ ನೇಮಕಾತಿ (4ನೇ ನೇಮಕಾತಿ) ಅಥವಾ ಮುಂದಿನ ಕ್ಯಾಲೆಂಡರ್ ವರ್ಷದಲ್ಲಿ (ಆರನೆಯ) ಅವುಗಳನ್ನು ಹೊಸ ರಿಕ್ತ ಸ್ಥಾನಗಳೆಂದು ಪರಿಗಣಿಸಿ ರೋಸ್ಟರನ್ನು ಮುಂದುವರೆಸತಕ್ಕದ್ದು"

ಇ. ಕಂಡಿಕೆ 11ರಲ್ಲಿ ಸಮಾಜ ಕಲ್ಯಾಣ ಇಲಾಖೆಯ ನಂತರ "ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ" ಎಂಬುದನ್ನು ಸೇರಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಾ|| ಮಂಗಳ ಜಿ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ (ಸೇವಾ ನಿಯಮಗಳು–1).

**P.R. 261**

**SC-500**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಅಹ್ಮದ್ ಎ. ಮುಖ್ತಿದರ್, ಸರ್ಕಾರದ ಅಪರ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಇವರಿಗೆ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಅಧಿಕಾರಿಯವರು ಮನವಿ ದಿನಾಂಕ : 15–11–2014.
2. ಮಹಾಲೇಖಪಾಲರ ಪತ್ರ ಸಂಖ್ಯೆ : PV-13/R-1/SRV-145/2014-15/146, ದಿನಾಂಕ : 11–2–2015.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಮನವಿಯಲ್ಲಿ ಶ್ರೀ ಅಹ್ಮದ್ ಎ. ಮುಖ್ತಿದರ್, ಸರ್ಕಾರದ ಅಪರ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಇವರು ವೈಯುಕ್ತಿಕ ಕಾರಣಗಳಿಂದಾಗಿ ದಿನಾಂಕ : 31–3–2015 ರಿಂದ ಜಾರಿಗೆ ಬರುವಂತೆ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಮಹಾಲೇಖಪಾಲರ ಪತ್ರದಲ್ಲಿ ಸದರಿ ಅಧಿಕಾರಿಯವರ ಸೇವಾ ಪುಸ್ತಕವನ್ನು ಪರಿಶೀಲಿಸಿ, ದಿನಾಂಕ : 31–1–2014ಕ್ಕೆ ಅಧಿಕಾರಿಯವರು 39 ವರ್ಷ, 4 ತಿಂಗಳು ಹಾಗೂ 11 ದಿನಗಳ ಅರ್ಹತಾದಾಯಕ ಸೇವೆಯನ್ನು ಪೂರ್ಣಗೊಳಿಸಿದ್ದಾರೆಂದು ದೃಢೀಕರಿಸಿರುತ್ತಾರೆ. ಸದರಿ ಅಧಿಕಾರಿಯವರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 450 ಸಉಸೇ 2014, ಬೆಂಗಳೂರು, ದಿನಾಂಕ : 19ನೇ ಮಾರ್ಚ್, 2015.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಅಹ್ಮದ್ ಎ. ಮುಖ್ತಿದರ್, ಸರ್ಕಾರದ ಅಪರ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ 285(1)(ಎ) ಅನ್ವಯ ದಿನಾಂಕ : 31–3–2015ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ (ಸೇವೆಗಳು–6).

**P.R. 263**

*ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59*